# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀಮತಿ. ಜಯಮ್ಮ (ವಿಧಾನ ಸಭೆಯಿಂದ ಚುನಾಯಿತರಾದವರು)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 480

ಉತ್ತರಿಸಬೇಕಾದ ದಿನಾಂಕ : 22-07-2019

ಉತ್ತರಿಸುವ ಸಚಿವರು : ಪಶುಸಂಗೋಪನೆ ಹಾಗೂ ಮೀನುಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಪಶುಸಂಗೋಪನಾ ಇಲಾಖೆ ವತಿಯಿಂದ ಗ್ರಾಮಾಂತರ ಪ್ರದೇಶದಲ್ಲಿರುವ ಗ್ರಾಮೀಣ ಜನರಿಗೆ ಎಮ್ಮೆ. ಹಸು. ಕುರಿಗಳನ್ನು ನೀಡುವ ಯೋಜನೆ ಇದೆಯೇ: | ಇದೆ |
| ಆ | ಇದ್ದಲ್ಲಿ, ಈ ಯೋಜನೆಯ ಮಾನದಂಡಗಳ ಬಗ್ಗೆ ವಿವರವಾದ ಮಾಹಿತಿ ನೀಡುವುದು. | ಮಾಹಿತಿ ಲಗತ್ತಿಸಿದೆ |

ಪಸಂಮೀ 20 ಸಲೆವಿ 2019

(ವೆಂಕಟರಾವ್ ನಾಡಗೌಡ)
ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವರು

436



**ಕರ್ನಾಟಕ ಸರ್ಕಾರದ ನಡವಳಿಗಳು**

ವಿಷಯ: 2018-19 ನೇ ಸಾಲಿನ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ವಿವಿಧ ಫಲಾನುಭವಿ ಆಧಾರಿತ ಕಾರ್ಯಕ್ರಮಗಳ ಫಲಾನುಭವಿಗಳ ಆಯ್ಕೆ ಸಮಿತಿ ಹಾಗೂ ಪರಿಷ್ಕೃತ ಮಾರ್ಗಸೂಚಿಗಳಿಗೆ ಅನುಮೋದನೆ ನೀಡುವ ಕುರಿತು.

ಓದಲಾಗಿದೆ:
1) ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 121 ಕಹಾಮ 2014, ದಿನಾಂಕ: 04.02.2015.
2) ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 62 ಪಪಾಯೋ 2015, ದಿನಾಂಕ: 18.08.2015.
3) ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 62 ಪಪಾಯೋ 2015, ದಿನಾಂಕ: 29.09.2016 ಹಾಗೂ ಸೇರ್ಪಡೆ ಆದೇಶ ದಿನಾಂಕ:16.11.2016
4) ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 52 ಪಪಾಯೋ 2018, ದಿನಾಂಕ: 11.04.2018
5) ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 52 ಪಪಾಯೋ 2018, ದಿನಾಂಕ: 28.04.2018.
6) ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಇವರ ಏಕ ಕಡತ ಸಂಖ್ಯೆ: ಆಪಸಂ/ಯೋಜನೆ-3:ವಿಪ-1:2018-19

Commissioner

ಪ್ರಸ್ತಾವನೆ:

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ 2014-15 ನೇ ಸಾಲಿನ ಪರಿಶಿಷ್ಟ ಜಾತಿ ಉಪ ಯೋಜನೆ ಮತ್ತು ಗಿರಿಜನ ಉಪಯೋಜನೆ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ಮಾರ್ಗಸೂಚಿಗಳನ್ನು ಹೊರಡಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2015-16 ನೇ ಸಾಲಿನಲ್ಲಿ ಪಶುಭಾಗ್ಯ ಯೋಜನೆಯಡಿಯಲ್ಲಿ ಫಲಾನುಭವಿಗಳ ಆಯ್ಕೆಗಾಗಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದಲ್ಲಿ ಸಮಿತಿಯನ್ನು ರಚಿಸಿ, ಮಾರ್ಗಸೂಚಿಗಳನ್ನು ಹೊರಡಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪಶುಭಾಗ್ಯ ಯೋಜನೆಯಡಿಯಲ್ಲಿ ಫಲಾನುಭವಿಗಳ ಆಯ್ಕೆಗಾಗಿ ಜಿಲ್ಲಾ ಮಟ್ಟದಲ್ಲಿ ರಚಿಸಲಾಗಿದ್ದ ಸಮಿತಿಯನ್ನು ಬದಲಾವಣೆ ಮಾಡಿ ತಾಲ್ಲೂಕಿನ ಸ್ಥಳೀಯ ವಿಧಾನಸಭಾ ಕ್ಷೇತ್ರದ ಶಾಸಕರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿ ಮಾರ್ಗಸೂಚಿಗಳನ್ನು ಹೊರಡಿಸಿ ಆದೇಶಿಸಲಾಗಿದೆ.

..2..

ಮೇಲೆ ಕ್ರಮ ಸಂಖ್ಯೆ: (4) ರಲ್ಲಿ ಓದಲಾದ ದಿನಾಂಕ: 11.04.2018 ರ ಸರ್ಕಾರದ ಆದೇಶದಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು 2018-19 ನೇ ಸಾಲಿಗೆ ಮುಂದುವರೆಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ: (5) ರಲ್ಲಿ ಓದಲಾದ ದಿನಾಂಕ: 28.04.2018 ರ ಸರ್ಕಾರದ ಆದೇಶದಲ್ಲಿ 2018-19ನೇ ಸಾಲಿನ ರಾಜ್ಯ ವಲಯದ ಕ್ರಿಯಾ ಯೋಜನೆಗಳಿಗೆ ಅನುಮೋದನೆ ನೀಡಿ ಆದೇಶಿಸಲಾಗಿದೆ.

ಮೇಲೆ ಕ್ರಮಸಂಖ್ಯೆ: (6) ರಲ್ಲಿ ಓದಲಾದ ಏಕ ಕಡತದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಇವರು 2018-19 ನೇ ಸಾಲಿನ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ವಿವಿಧ ಫಲಾನುಭವಿ ಆಧಾರಿತ ಕಾರ್ಯಕ್ರಮಗಳಾದ ಪಶುಭಾಗ್ಯ, ಮಹಿಳೆಯರಿಗಾಗಿ ಪಶುಸಂಗೋಪನೆ ಮತ್ತು ಪರಿಶಿಷ್ಟ ಜಾತಿ ಉಪ ಯೋಜನೆ ಹಾಗೂ ಗಿರಿಜನ ಉಪ ಯೋಜನೆಗಳ ಜಿಲ್ಲಾವಾರು ಭೌತಿಕ ಮತ್ತು ಆರ್ಥಿಕ ಗುರಿ ನಿಗದಿಪಡಿಸಿದ್ದು, ಸದರಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಏಕ ರೂಪ ಆಯ್ಕೆ ಸಮಿತಿಯಿಂದ ಫಲಾನುಭವಿಗಳನ್ನು ಆಯ್ಕೆಮಾಡಿ ಅನುಷ್ಠಾನಗೊಳಿಸಲು ಈ ಕೆಳಕಂಡಂತೆ ಸಮಿತಿ ರಚಿಸಲು ಪ್ರಸ್ತಾಪಿಸಿರುತ್ತಾರೆ.

ಫಲಾನುಭವಿಗಳ ಆಯ್ಕೆ ಸಮಿತಿ

| | | |
|---|---|---|
| 1 | ವಿಧಾನಸಭಾ ಕ್ಷೇತ್ರದ ಮಾನ್ಯ ಶಾಸಕರು | ಅಧ್ಯಕ್ಷರು |
| 2 | ತಾಲ್ಲೂಕಿನಲ್ಲಿ ಖಾಯಂ ಆಗಿ ವಾಸಿಸುತ್ತಿರುವ ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 3 | ತಾಲ್ಲೂಕು ಕಾರ್ಯನಿರ್ವಹಣಾಧಿಕಾರಿ | ಸದಸ್ಯರು |
| 4 | ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ | ಸದಸ್ಯರು |
| 5 | ಶಿಶು ಅಭಿವೃದ್ಧಿ ಯೋಜನಾಧಿಕಾರಿ | ಸದಸ್ಯರು |
| 6 | ತಾಲ್ಲೂಕು ಸಹಾಯಕ ನಿರ್ದೇಶಕರು / ಮುಖ್ಯ ಪಶು ವೈದ್ಯಾಧಿಕಾರಿ (ಆಡಳಿತ), ತಾಲ್ಲೂಕು ಆಸ್ಪತ್ರೆ ಪಶುಪಾಲನಾ ಇಲಾಖೆ | ಸದಸ್ಯ ಕಾರ್ಯದರ್ಶಿ |

ಅಲ್ಲದೇ ಈಗಾಗಲೇ ಹೊರಡಿಸಿರುವ ಮಾರ್ಗಸೂಚಿಗಳನ್ನು ಸರಿಪಡಿಸಿ ಪರಿಷ್ಕೃತ ಮಾರ್ಗಸೂಚಿಗಳನ್ನು ಹೊರಡಿಸುವಂತೆ ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ವಯ 2018-19 ನೇ ಸಾಲಿನ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ವಿವಿಧ ಫಲಾನುಭವಿ ಆಧಾರಿತ ಕಾರ್ಯಕ್ರಮಗಳಾದ

..3..

ಗ್ರಾಮೀಣ ಪ್ರದೇಶದ ಫಲಾನುಭವಿಗಳಿಗೆ ದನದ ಕೊಟ್ಟಿಗೆ ನಿರ್ಮಾಣಕ್ಕಾಗಿ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ (MGNREGA) ಯೋಜನೆಯಡಿ ಅವಕಾಶ ಕಲ್ಪಿಸಿಕೊಡುವುದು.

13. ಕಳೆದ 5 ವರ್ಷಗಳಲ್ಲಿ ಪಶುಪಾಲನಾ ಇಲಾಖೆಯಲ್ಲಿ ಒಂದೇ ಚಟುವಟಿಕೆಗೆ ವಿವಿಧ ಯೋಜನೆಗಳಲ್ಲಿ ಸಹಾಯಧನದ ಸವಲತ್ತು ಪಡೆದಿರುವ ಕುಟುಂಬಗಳು ಹೊಸದಾಗಿ ಅದೇ ಚಟುವಟಿಕೆಗೆ ಲಾಭ ಪಡೆಯಲು ಅರ್ಹರಿರುವುದಿಲ್ಲ.

14. ಈ ಯೋಜನೆಯಡಿಯ ಫಲಾನುಭವಿಗಳ ಸ್ವತ್ತುಗಳನ್ನು ವಿಮೆಗೊಳಪಡಿಸಲು ರಾಷ್ಟ್ರೀಯ ಜಾನುವಾರು ವಿಮಾ ಯೋಜನೆಯಡಿ/ಸಾಮಾನ್ಯ ವಿಮೆ ಯೋಜನೆಯಡಿ ಕ್ರಮ ವಹಿಸುವುದು.

15. ನಿಯಮಾನುಸಾರ ಆಯ್ಕೆಯಾದ ಫಲಾನುಭವಿ ಮರಣ ಹೊಂದಿದಲ್ಲಿ ಅವರ ಅಧಿಕೃತ ವಾರಸುದಾರರು ಈ ಯೋಜನೆಯ ಸವಲತ್ತನ್ನು ಪಡೆಯಲು ಅರ್ಹರಾಗಿರುತ್ತಾರೆ.

16. ಯೋಜನೆ ಅನುಷ್ಠಾನಗೊಳಿಸಿದ ಕೂಡಲೇ ಹಣ ಬಳಕೆ ಪ್ರಮಾಣ ಪತ್ರ ಹಾಗೂ ಪ್ರಗತಿ ವಿವರಗಳನ್ನು ಜಿಲ್ಲಾ ಉಪ ನಿರ್ದೇಶಕರ ಮುಖಾಂತರ ಆಯುಕ್ತಾಲಯಕ್ಕೆ ಸಲ್ಲಿಸಲು ತಪ್ಪದೆ ಕ್ರಮವಹಿಸತಕ್ಕದ್ದು.

## 7. ಯೋಜನಾ ಅನುಷ್ಠಾನಾಧಿಕಾರಿಗಳು:-

ತಾಲ್ಲೂಕು ಸಹಾಯಕ ನಿರ್ದೇಶಕರು/ಪಶುವೈದ್ಯಾಧಿಕಾರಿಗಳು ಯೋಜನೆಯ ಅನುಷ್ಠಾನಾಧಿಕಾರಿಗಳಾಗಿರುತ್ತಾರೆ ಮತ್ತು ಈ ಕೆಳಗಿನ ಎಲ್ಲ ದಾಖಲೆ ಪತ್ರ ನಿರ್ವಹಿಸುವುದು ಅವರ ಜವಾಬ್ದಾರಿ ಆಗಿದೆ.

1. ಮೂಲ ಅರ್ಜಿ ಪ್ರತಿ
2. ಸಾಲ ಮಂಜೂರಾತಿ ಪತ್ರ
3. ಫಲಾನುಭವಿಯಿಂದ ಸಹಾಯಧನ ಸ್ವೀಕೃತಿ ರಸೀದಿ
4. ಸ್ವತ್ತು ಖರೀದಿ ನಗದು ರಸೀದಿ
5. ಫಲಾನುಭವಿಯೊಂದಿಗೆ ರಾಸುವಿನ ಛಾಯಾಚಿತ್ರ
6. ಜಾನುವಾರು ಆರೋಗ್ಯ ದೃಢೀಕರಣ ಹಾಗೂ ವಿಮಾ ಪಾಲಿಸಿ ಪತ್ರ
7. ಸಾಗಾಣಿಕೆ ವೆಚ್ಚದ ಬಿಲ್ (ರಶೀದಿ)
8. ಪಶು ಆಹಾರ ಖರೀದಿ ಬಿಲ್‌ಗಳು

## 8. ಸಹಾಯಧನ ಸೆಳೆಯುವ ವಿಧಾನ:-

ಅನುಷ್ಠಾನಾಧಿಕಾರಿಗಳು ಸಾದಿಲ್ವಾರು ಬಿಲ್ಲನ್ನು ರಾಜ್ಯವಲಯದ ಲೆಕ್ಕಶೀರ್ಷಿಕೆ 2401-00-800-1-57 (ಉಪ ಶೀರ್ಷಿಕೆ 059 - ಇತರೆ 422 - ಪರಿಶಿಷ್ಟ ಜಾತಿ ಉಪ ಯೋಜನೆ ಹಾಗೂ ಉಪ ಶೀರ್ಷಿಕೆ 423 - ಗಿರಿಜನ ಉಪ (ಯೋಜನೆ) ಅಡಿಯಲ್ಲಿ ಬಿಳಿಬಣ್ಣದ ಬಿಲ್ಲಿನಲ್ಲಿ ಅನುಷ್ಠಾನಾಧಿಕಾರಿಗಳು ತಯಾರಿಸಿ ಕೆಳಕಂಡ ದಾಖಲಾತಿಗಳು ಮತ್ತು ದೃಢೀಕರಣದೊಂದಿಗೆ ಮೇಲುರುಜುವಿಗಾಗಿ ಜಿಲ್ಲಾ ಉಪ ನಿರ್ದೇಶಕರಿಗೆ ಸಲ್ಲಿಸುವುದು.

- ಫಲಾನುಭವಿ ಆಯ್ಕೆಯಾಗಿರುವ ಬಗ್ಗೆ ಸಮಿತಿಯಿಂದ ಅನುಮೋದಿಸಿದ ಪಟ್ಟಿ.
- ಫಲಾನುಭವಿಯ ಜಾತಿ ಪ್ರಮಾಣ ಪತ್ರ
- ಫಲಾನುಭವಿಯ ಭಾವಚಿತ್ರ
- ಈ ಹಿಂದೆ ಇಲಾಖೆಯಿಂದ ಫಲಾನುಭವಿಯ ಕುಟುಂಬವು ಸಹಾಯಧನ ಪಡೆಯದಿರುವ ಬಗ್ಗೆ ದೃಢೀಕರಣ ಪತ್ರ
- ಬ್ಯಾಂಕ್‌ಗಳಿಂದ ಸಾಲ ಮಂಜೂರಾತಿ ಬಗ್ಗೆ ಬೇಡಿಕೆ ಪತ್ರ (ನಿಗದಿತ ನಮೂನೆಯಲ್ಲಿ) ಪಡೆಯುವುದು.
- ಫಲಾನುಭವಿಯಿಂದ ಸಹಾಯಧನ ಪಡೆಯುವ ಬಗ್ಗೆ ಮುಂಗಡ ರಸೀತಿ (ತ್ರಿಪ್ರತಿಯಲ್ಲಿ)

## 9. ಸ್ವತ್ತು ಖರೀದಿ ಸಮಿತಿ

1. ಫಲಾನುಭವಿಯ ಗ್ರಾಮ ವ್ಯಾಪ್ತಿಯ ಸ್ಥಳೀಯ ಪಶುವೈದ್ಯಾಧಿಕಾರಿ
2. ಬ್ಯಾಂಕ್ ಅಧಿಕಾರಿ/ಪ್ರತಿನಿಧಿ
3. ಫಲಾನುಭವಿ.

# ಅನುಬಂಧ – 2

## ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 116 ಪಪಾಯೋ 2018, ದಿನಾಂಕ: 10.08.2018 ಕ್ಕೆ ಅನುಬಂಧ

## ಪರಿಶಿಷ್ಟ ಜಾತಿ ಉಪ ಯೋಜನೆ (ವಿಶೇಷ ಘಟಕ ಯೋಜನೆ) ಮತ್ತು ಗಿರಿಜನ ಉಪ ಯೋಜನೆಗಳ ಕಾರ್ಯಕ್ರಮ ಅನುಷ್ಠಾನದ ಮಾರ್ಗಸೂಚಿಗಳು.

1. **ಯೋಜನಾ ಕಾರ್ಯಕ್ರಮಗಳು:–**

- ಹೈನುಗಾರಿಕೆ ಘಟಕ:– ಪ್ರತಿ ಫಲಾನುಭವಿಗೆ ಅವರ ಆಸಕ್ತಿ ಅಥವಾ ಇಚ್ಛೆಯಂತೆ ಹೈನುಗಾರಿಕೆಗಾಗಿ 2 ಮಿಶ್ರ ತಳಿ ಹಸು ಅಥವಾ 2 ಸುಧಾರಿತ ಎಮ್ಮೆಗಳ ಒಂದು ಘಟಕ ನೀಡುವುದು.
- ಕುರಿ ಅಥವಾ ಮೇಕೆ ಘಟಕ (10:1) ಸ್ಥಾಪನೆ–ಹತ್ತು ಕುರಿ/ಮೇಕೆ ಮತ್ತು ಒಂದು ಟಗರು/ ಹೋತ ನೀಡುವುದು.
- ಹಂದಿ ಘಟಕ (1:1) ಹಂದಿಮರಿಗಳು – 10 ಹಂದಿ ಮರಿಗಳನ್ನು ನೀಡುವುದು

2. **ಘಟಕದ ವೆಚ್ಚ:–**

ಘಟಕವಾರು ವೆಚ್ಚದ ವಿವರವನ್ನು ಅನುಬಂಧ – ಎ, ಬಿ, ಸಿ ರಲ್ಲಿ ನೀಡಿದೆ.

3. **ಯೋಜನಾ ವ್ಯಾಪ್ತಿ:–**

ರಾಜ್ಯದ 30 ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲಾಗುವುದು.

4. **ಅರ್ಹ ಫಲಾನುಭವಿಗಳು:–**

1. ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪ ಯೋಜನೆ ಕಾರ್ಯಕ್ರಮಗಳಿಗೆ ಫಲಾನುಭವಿಗಳು ಕ್ರಮವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದವರಾಗಿರಬೇಕು.
2. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ನೀಡುವ ಜಾತಿ ಪ್ರಮಾಣ ಪತ್ರವನ್ನು ಹೊಂದಿರಬೇಕು.
3. ಸದರಿ ಕಾರ್ಯಕ್ರಮದಲ್ಲಿ ಸರ್ಕಾರದ ನಿಯಮಗಳಂತೆ ಮಹಿಳೆಯರಿಗೆ (33%ರಷ್ಟು) ಹಾಗೂ ವಿಶೇಷ ಚೇತನರಿಗೆ (ಕನಿಷ್ಠ 5%ರಷ್ಟು) ಆದ್ಯತೆ ನೀಡುವುದು.

5. **ಫಲಾನುಭವಿಯ ಆಯ್ಕೆ**

ವಿಧಾನ ಸಭಾ ಕ್ಷೇತ್ರವಾರುವಿನಲ್ಲಿ ಸಹಾಯಕ ನಿರ್ದೇಶಕರು ಫಲಾನುಭವಿಗಳಿಂದ ಅರ್ಜಿ ಪಡೆದು ನಿಗದಿಪಡಿಸಿದ ಗುರಿಗೆ ಆಯ್ಕೆ ಸಮಿತಿ ಮೂಲಕ ನಿಗದಿತ ಸಮಯದಲ್ಲಿ ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡಬೇಕು.

ಫಲಾನುಭವಿಗಳ ಆಯ್ಕೆ ಸಮಿತಿ

| | | |
|---|---|---|
| 1. | ಮಾನ್ಯ ವಿಧಾನಸಭಾ ಕ್ಷೇತ್ರದ ಶಾಸಕರು | ಅಧ್ಯಕ್ಷರು |
| 2. | ತಾಲ್ಲೂಕಿನಲ್ಲಿ ಖಾಯಂ ಆಗಿ ವಾಸಿಸುತ್ತಿರುವ ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 3. | ತಾಲ್ಲೂಕು ಕಾರ್ಯನಿರ್ವಹಣಾಧಿಕಾರಿ | ಸದಸ್ಯರು |
| 4. | ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ | ಸದಸ್ಯರು |
| 5. | ಶಿಶು ಅಭಿವೃದ್ಧಿ ಯೋಜನಾಧಿಕಾರಿ | ಸದಸ್ಯರು |

| | | |
|---|---|---|
| 6. | ತಾಲ್ಲೂಕು ಸಹಾಯಕ ನಿರ್ದೇಶಕರು/ಮುಖ್ಯ ಪಶು ವೈದ್ಯಾಧಿಕಾರಿ (ಆಡಳಿತ), ತಾಲ್ಲೂಕು ಆಸ್ಪತ್ರೆ ಪಶುಪಾಲನಾ ಇಲಾಖೆ | ಸದಸ್ಯ ಕಾರ್ಯದರ್ಶಿ |

## 6. ಸಮಿತಿಯ ಕಾರ್ಯವ್ಯಾಪ್ತಿ

1. ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆ ಫಲಾನುಭವಿಗಳನ್ನು ಕ್ಲುಪ್ತ ಸಮಯದಲ್ಲಿ ಗುರಿಗಳನ್ವಯ ಆಯ್ಕೆ ಮಾಡುವುದು. ಈ ಕಾರ್ಯಕ್ರಮವು ಯಶಸ್ವಿಯಾಗಿ ಕಾರ್ಯಗತವಾಗಲು ಸಲಹೆ ನೀಡುವುದು.
2. ಯೋಜನೆಯಲ್ಲಿ ಲೋಪದೋಷಗಳು ಕಂಡುಬಂದರೆ ಅಂಥವುಗಳನ್ನು ನಿವಾರಿಸಲು ಸಲಹೆ ನೀಡುವುದು.
3. ಗುಣಮಟ್ಟದ ವಸ್ತುಗಳನ್ನು ಖರೀದಿಸಲು ಸಲಹೆ ನೀಡುವುದು.
4. ಫಲಾನುಭವಿಯ ನಿರಾಸಕ್ತಿ, ಇನ್ನಿತರೆ ಕಾರಣಗಳಿಂದ ಅನುದಾನ ಬಳಕೆಯಾಗದ ಸಂದರ್ಭದಲ್ಲಿ ಅನುದಾನಕ್ಕೆ ಅನುಗುಣವಾಗಿ ಬೇರೆ ಫಲಾನುಭವಿಗಳನ್ನು ಆಯ್ಕೆ ಮಾಡುವುದು.

## 7. ಯೋಜನಾ ಅನುಷ್ಠಾನ ವಿಧಾನ

1. ರಾಜ್ಯ ಮಟ್ಟದಲ್ಲಿ ಜಿಲ್ಲೆಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನಸಂಖ್ಯೆ ಅನುಗುಣವಾಗಿ ಹಾಗೂ ಅಗತ್ಯತೆಗೆ ಅನುಸಾರವಾಗಿ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪ ಯೋಜನೆ ಗುರಿಗಳನ್ನು ನಿಗದಿಪಡಿಸಲಾಗುವುದು.
2. ಜಿಲ್ಲಾ ಉಪ ನಿರ್ದೇಶಕರುಗಳು ತಾಲ್ಲೂಕು ಸಹಾಯಕ ನಿರ್ದೇಶಕರುಗಳಿಗೆ ಗುರಿಗಳನ್ನು ತಾಲ್ಲೂಕುವಾರು/ಘಟಕವಾರು ಜನಸಂಖ್ಯೆಗೆ (ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ) ಅನುಸಾರವಾಗಿ ಹಂಚಿಕೆ ಮಾಡುವುದು ಹಾಗೂ ಅದಕ್ಕೆ ತಕ್ಕಂತೆ ಅನುದಾನವನ್ನು ಮರುಹಂಚಿಕೆ ಮಾಡುವುದು.
3. ಸಹಾಯಕ ನಿರ್ದೇಶಕರು ವಿಧಾನಸಭಾ ಕ್ಷೇತ್ರವಾರು ಗುರಿಗಳನ್ನು ಮತ್ತು ಅದಕ್ಕೆ ತಕ್ಕಂತೆ ಅನುದಾನವನ್ನು ಮರುಹಂಚಿಕೆ ಮಾಡಿ, ಸಾರ್ವಜನಿಕರಿಂದ ಅರ್ಜಿ ಆಹ್ವಾನ ಮಾಡುವುದು.
4. ಜಿಲ್ಲೆಗೆ ನಿಗದಿಯಾದ ಗುರಿಗಳನ್ನು ಜಿಲ್ಲಾ ಲೀಡ್ ಬ್ಯಾಂಕ್ ಮುಖಾಂತರ ಬ್ಯಾಂಕ್‌ವಾರು ಗುರಿ ನಿಗದಿಪಡಿಸಲು ಉಪ ನಿರ್ದೇಶಕರು ಕ್ರಮವಹಿಸತಕ್ಕದ್ದು.

ಸಹಾಯಕ ನಿರ್ದೇಶಕರು ಜಿಲ್ಲಾ ಕ್ರಮಬದ್ಧ ಅರ್ಜಿಗಳ ಪಟ್ಟಿಯನ್ನು (ಘಟಕವಾರು) ಆಯಾ ವಿಧಾನಸಭಾ ಕ್ಷೇತ್ರದ ಮಾನ್ಯ ಶಾಸಕರ ಅಧ್ಯಕ್ಷತೆಯಲ್ಲಿನ ಸಮಿತಿ ಮುಂದೆ ಮಂಡಿಸುವುದು ಹಾಗೂ ನಿಗದಿತ ಗುರಿಗನುಗುಣವಾಗಿ ಆಯ್ಕೆಪಟ್ಟಿ ತಯಾರಿಸುವುದು.

6. ಫಲಾನುಭವಿಗಳನ್ನು ಆಯ್ಕೆಗೊಳಿಸುವಾಗ ಮಾನ್ಯ ಮುಖ್ಯ ಮಂತ್ರಿಗಳ ಕಾರ್ಯಾಲಯದಿಂದ, ಇಲಾಖಾ ಸಚಿವರಿಂದ, ಸಚಿವಾಲಯದಿಂದ, ಆಯುಕ್ತಾಲಯದಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಸಲ್ಲಿಕೆಯಾಗಿರುವ ಅರ್ಜಿಗಳನ್ನು ಸಹ ಫಲಾನುಭವಿಗಳ ಆಯ್ಕೆ ವೇಳೆ ಪರಿಗಣಿಸುವುದು.
7. ಸಹಾಯಕ ನಿರ್ದೇಶಕರು ವಿಳಂಬವಿಲ್ಲದೆ ಸಂಬಂಧಿಸಿದ ಪಶುವೈದ್ಯಾಧಿಕಾರಿಗಳ ಮುಖಾಂತರ ಆಯ್ಕೆಯಾದ ಫಲಾನುಭವಿಗಳ ಅರ್ಜಿಯನ್ನು ದಾಖಲೆಗಳೊಂದಿಗೆ ಸಾಲ ಮಂಜೂರಾತಿಗಾಗಿ ಬ್ಯಾಂಕ್‌ಗಳಿಗೆ ಸಲ್ಲಿಸುವುದು.
8. ಕ್ಷೇತ್ರ ವ್ಯಾಪ್ತಿಯ ಪಶುವೈದ್ಯಾಧಿಕಾರಿಗಳು ಸಂಬಂಧಿಸಿದ ಬ್ಯಾಂಕ್‌ಗಳಿಂದ ಸಾಲ ಮಂಜೂರಾತಿ ಪತ್ರ ಪಡೆದು ಸಹಾಯಕ ನಿರ್ದೇಶಕರಿಗೆ ಸಲ್ಲಿಸುವುದು.
9. ಈ ಯೋಜನೆಯನ್ನು ರಾಷ್ಟ್ರೀಕೃತ ಬ್ಯಾಂಕ್‌ಗಳು/ವಾಣಿಜ್ಯ ಬ್ಯಾಂಕ್‌ಗಳನ್ನು ಒಳಗೊಂಡಂತೆ ಸಹಕಾರಿ ಬ್ಯಾಂಕ್‌ಗಳ ಮುಖಾಂತರವೂ ಸಾಲ ಮಂಜೂರಾತಿಯೊಂದಿಗೆ ಅನುಷ್ಠಾನಗೊಳಿಸುವುದು.
10. ಸಹಾಯಕ ನಿರ್ದೇಶಕರು/ಅನುಷ್ಠಾನ ಅಧಿಕಾರಿಗಳು ಆಯ್ಕೆಯಾದ ಫಲಾನುಭವಿಗಳ ಸಹಾಯಧನವನ್ನು ಆಯಾ ಬ್ಯಾಂಕುಗಳಿಗೆ ಬಿಡುಗಡೆಗೊಳಿಸಿ ಯೋಜನೆ ಅನುಷ್ಠಾನಗೊಳಿಸುವುದು.

## ಅನುಬಂಧ –ಎ

### ಹೈನುಗಾರಿಕೆ ಘಟಕ

❖ ಸದರಿ ಕಾರ್ಯಕ್ರಮದಲ್ಲಿ ಲೆಕ್ಕ ಶೀರ್ಷಿಕೆ 2403–00–001–0–04 ಉಪ ಶೀರ್ಷಿಕೆ 422/423 ಅಡಿಯಲ್ಲಿ ಹೈನುಗಾರಿಕೆಗಾಗಿ ಗರಿಷ್ಠ ರೂ.90,000/– ಸಹಾಯಧನದೊಂದಿಗೆ ರೂ.1,20,000/– ಘಟಕ ವೆಚ್ಚದಲ್ಲಿ 08–10 LPD ಹಾಲು ಕರೆಯುವ ಸಾಮರ್ಥ್ಯದ ಎರಡು ಮಿಶ್ರ ತಳಿ ಹಸು/ 5–6 LPD ಹಾಲು ಕರೆಯುವ ಸಾಮರ್ಥ್ಯದ ಎರಡು ಸುಧಾರಿತ ಎಮ್ಮೆಗಳ ಘಟವನ್ನು ಪ್ರತಿಯೊಬ್ಬ ಪರಿಶಿಷ್ಟ ಜಾತಿಯ/ಪಂಗಡ ಫಲಾನುಭವಿಗೆ ನೀಡಲು ಯೋಜಿಸಿದೆ.

| ಕ್ರ ಸಂ | ಹೈನುಗಾರಿಕೆ ಘಟಕದ ವಿವರ | ಮೊತ್ತ ರೂ.ಗಳಲ್ಲಿ |
|---|---|---|
| 1 | a) ಎರಡು ಹಾಲು ಕರೆಯುವ ಮಿಶ್ರ ತಳಿ ಹಸು(08–10 LPD) / ಎರಡು ಸುಧಾರಿತ ಎಮ್ಮೆ ಘಟಕ (05–06 LPD) ಖರೀದಿಗೆ ಗರಿಷ್ಠ ಮೊತ್ತ | 100000=00 |
| | b) ಜಾನುವಾರು ವಿಮೆ (ಮೂರು ವರ್ಷಕ್ಕೆ) ಮೊತ್ತ | 5000=00 |
| | c) ಸಾಗಾಣಿಕೆ ವೆಚ್ಚ (ಗರಿಷ್ಠ) | 5000=00 |
| | d) ಪಶು ಆಹಾರ ಮತ್ತು ಲವಣ ಮಿಶ್ರಣ | 10000=00 |
| | ಒಟ್ಟು ಮೊತ್ತ | 120000=00 |

## ಅನುಬಂಧ – ಬಿ

### ಕುರಿ / ಮೇಕೆ ಘಟಕ (10+1)

❖ ಸದರಿ ಕಾರ್ಯಕ್ರಮದಲ್ಲಿ ಲೆಕ್ಕ ಶೀರ್ಷಿಕೆ 2403–00–001–0–04 ಉಪ ಶೀರ್ಷಿಕೆ 422/423 ಅಡಿಯಲ್ಲಿ ಕುರಿ/ ಮೇಕೆ ಘಟಕ ರೂ. 60,000/– ಸಹಾಯಧನದೊಂದಿಗೆ ರೂ.67,440/– ಘಟಕ ವೆಚ್ಚದಲ್ಲಿ 10 ಹೆಣ್ಣು+1 ಗಂಡು ಕುರಿ ಅಥವಾ ಮೇಕೆ ಘಟಕವನ್ನು ಪ್ರತಿಯೊಬ್ಬ ಪರಿಶಿಷ್ಟ ಜಾತಿಯ/ ಪರಿಶಿಷ್ಟ ಪಂಗಡದ ಫಲಾನುಭವಿಗೆ ನೀಡಲು ಯೋಜಿಸಿದೆ.

| ಕ್ರ.ಸಂ | ವಿವರ | ಮೊತ್ತ ರೂ.ಗಳಲ್ಲಿ |
|---|---|---|
| 1 | ಆರು ತಿಂಗಳ ವಯಸ್ಸಿಗೆ ಮೇಲ್ಪಟ್ಟ 10 ಕುರಿ/ಮೇಕೆ ಖರೀದಿಗೆ (ಒಂದು ಕುರಿ / ಮೇಕೆಗೆ 5500/– ರಂತೆ ) ಗರಿಷ್ಠ ಮೊತ್ತ | 55,000 |
| 2 | ಆರು ತಿಂಗಳ ವಯಸ್ಸಿಗೆ ಮೇಲ್ಪಟ್ಟ ಒಂದು ಟಗರು/ ಹೋತ ಖರೀದಿ ಮೊತ್ತ | 7,000 |
| 3 | ಆಹಾರ ವೆಚ್ಚ | 5,440 |
| | ಒಟ್ಟು ಮೊತ್ತ | 67,440 |

<u>ಅನುಬಂಧ – ಸಿ</u>

## ಹಂದಿ ಘಟಕ

- ಸದರಿ ಕಾರ್ಯಕ್ರಮದಲ್ಲಿ ಲೆಕ್ಕ ಶೀರ್ಷಿಕೆ 2403–00–001–0–04 ಉಪ ಶೀರ್ಷಿಕೆ 422/423 ಅಡಿಯಲ್ಲಿ ಪರಿಶಿಷ್ಟ ಜಾತಿ ಉಪ ಯೋಜನೆ ಕಾರ್ಯಕ್ರಮದಡಿ ಹಂದಿ ಘಟಕ ರೂ: 75,000/- ಸಹಾಯಧನದೊಂದಿಗೆ, ರೂ100000/- ಘಟಕ ವೆಚ್ಚದಲ್ಲಿ 10 ಹೆಣ್ಣು/ಗಂಡು ಹಂದಿ ಮರಿಗಳ ಘಟಕವನ್ನು ಪ್ರತಿಯೊಬ್ಬ ಪರಿಶಿಷ್ಟ ಜಾತಿಯ ಪಂಗಡದ ಫಲಾನುಭವಿಗೆ ನೀಡಲು ಯೋಜಿಸಿದೆ.

| ಕ್ರಸಂ | ವಿವರ | ಮೊತ್ತ ರೂ.ಗಳಲ್ಲಿ |
|---|---|---|
| 1 | 10 ಹಂದಿ ಮರಿಗಳ ಖರೀದಿ (6ರಿಂದ 7ತಿಂಗಳು) ಪ್ರತಿಯೊಂದಕ್ಕೆ ರೂ 8000/- ರಂತೆ | 80,000/- |
| 2 | ವಿಮಾ ವೆಚ್ಚ ಗರಿಷ್ಠ | 4000/- |
| 3 | ಆಹಾರದ ವೆಚ್ಚ | 11000/- |
| 4 | ಸಲಕರಣೆ ವೆಚ್ಚ | 5000/- |
| | ಒಟ್ಟು ಮೊತ್ತ | 100000/- |

ಹನುಮಂತೇಗೌಡ 1/10/2018
(ಟಿ. ಹನುಮಂತೇಗೌಡ)
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

1

8. ಯೋಜನಾ ಅನುಷ್ಠಾನಾಧಿಕಾರಿಗಳು:-

ತಾಲ್ಲೂಕು ಸಹಾಯಕ ನಿರ್ದೇಶಕರು/ ಪಶುವೈದ್ಯಾಧಿಕಾರಿಗಳು ಯೋಜನೆಯ ಅನುಷ್ಠಾನಾಧಿಕಾರಿಗಳಾಗಿರುತ್ತಾರೆ. ಮತ್ತು ಈ ಕೆಳಗಿನ ಎಲ್ಲ ದಾಖಲೆ ಪತ್ರ ನಿರ್ವಹಿಸುವುದು ಅವರ ಜವಾಬ್ದಾರಿ ಆಗಿದೆ.

1. ಮೂಲ ಅರ್ಜಿ ಪ್ರತಿ
2. ಸಾಲ ಮಂಜೂರಾತಿ ಪತ್ರ
3. ಫಲಾನುಭವಿಯಿಂದ ಸಹಾಯಧನ ಸ್ವೀಕೃತಿ ರಸೀದಿ
4. ಸ್ವತ್ತು ಖರೀದಿ ನಗದು ರಸೀದಿ
5. ಫಲಾನುಭವಿಯೊಂದಿಗೆ ರಾಸುವಿನ ಭಾವಚಿತ್ರ
6. ಜಾನುವಾರು ಆರೋಗ್ಯ ದೃಢೀಕರಣ ಹಾಗೂ ವಿಮಾ ಪಾಲಿಸಿ ಪತ್ರ
7. ಸಾಗಾಣಿಕೆ ವೆಚ್ಚದ ಬಿಲ್ (ರಶೀದಿ)
8. ಪಶು ಆಹಾರ ಖರೀದಿ ಬಿಲ್‌ಗಳು
9. <u>ಸಹಾಯಧನ ಸೆಳೆಯುವ ವಿಧಾನ</u>

ಅನುಷ್ಠಾನಾಧಿಕಾರಿಗಳು ಸಾದಿಲ್ವಾರು ಬಿಲ್ಲನ್ನು ರಾಜ್ಯವಲಯದ ಲೆಕ್ಕ ಶೀರ್ಷಿಕೆ 2404-00-191-1-16 ಉಪ ಶೀರ್ಷಿಕೆ 422 (ವಿಶೇಷ ಘಟಕ ಯೋಜನೆ) ಹಾಗೂ ಉಪ ಶೀರ್ಷಿಕೆ 423 (ಗಿರಿಜನ ಉಪಯೋಜನೆ) ಉಪಶೀರ್ಷಿಕೆ 059 (ಸಾಮಾನ್ಯ ವರ್ಗ) ಅಡಿಯಲ್ಲಿ ಬಿಲ್ಲಿನಲ್ಲಿ ಅನುಷ್ಠಾನಾಧಿಕಾರಿಗಳು ತಯಾರಿಸಿ ಕೆಳಕಂಡ ದಾಖಲಾತಿಗಳು ಮತ್ತು ದೃಢೀಕರಣದೊಂದಿಗೆ ಮೇಲುರುಜುವಿಗಾಗಿ ಜಿಲ್ಲಾ ಉಪ ನಿರ್ದೇಶಕರಿಗೆ ಸಲ್ಲಿಸುವುದು.

- ಫಲಾನುಭವಿ ಆಯ್ಕೆಯಾಗಿರುವ ಬಗ್ಗೆ ಸಮಿತಿಯಿಂದ ಅನುಮೋದಿಸಿದ ಪಟ್ಟಿ.
- ಫಲಾನುಭವಿಯ ಜಾತಿ ಪ್ರಮಾಣ ಪತ್ರ
- ಫಲಾನುಭವಿಯ ಭಾವಚಿತ್ರ
- ಈ ಹಿಂದೆ ಇಲಾಖೆಯಿಂದ ಫಲಾನುಭವಿಯ ಕುಟುಂಬ ಸಹಾಯಪಡೆಯದಿರುವ ಬಗ್ಗೆ ದೃಢೀಕರಣ ಪತ್ರ
- ಬ್ಯಾಂಕುಗಳಿಂದ ಸಾಲ ಮಂಜೂರಾತಿ ಬಗ್ಗೆ ಒಪ್ಪಿಗೆ ಪತ್ರ/ ಫಲಾನುಭವಿ ಬ್ಯಾಂಕ್ ಖಾತೆಯಲ್ಲಿ ತನ್ನ ವಂತಿಗೆ ಜಮ ಮಾಡಿದ ಬಗ್ಗೆ ಬ್ಯಾಂಕಿನ ದೃಢೀಕರಣ ಪತ್ರ (ಬ್ಯಾಂಕಿನ ನೆರವು ಇರಲಿ/ಇಲ್ಲದಿರಲಿ ಬ್ಯಾಂಕಿನ ಖಾತೆ ಕಡ್ಡಾಯವಾಗಿದೆ)
- ಫಲಾನುಭವಿಯಿಂದ ಸಹಾಯಧನ ಪಡೆದಿರುವ ಬಗ್ಗೆ ಮುಂಗಡ ರಶೀದಿ (ತ್ರಿಪ್ರತಿಯಲ್ಲಿ)

10. <u>ಸ್ವತ್ತು ಖರೀದಿ ಸಮಿತಿ:-</u>
1. ಸ್ಥಳೀಯ ಪಶುವೈದ್ಯಾಧಿಕಾರಿ
2. ಬ್ಯಾಂಕ್ ಅಧಿಕಾರಿ/ ಪ್ರತಿನಿಧಿ
3. ಫಲಾನುಭವಿ

11. <u>ಯೋಜನೆ ಮೇಲ್ವಿಚಾರಣೆ</u>

1. ಕ್ಷೇತ್ರ ವ್ಯಾಪ್ತಿಯ ಪಶುವೈದ್ಯಾಧಿಕಾರಿಗಳು ಸ್ವತ್ತು ಖರೀದಿ ಸಮಿತಿ ಮೂಲಕ ರಾಸುಗಳ ಖರೀದಿ ಮಾಡುವುದು ಅನುಷ್ಠಾನಾಧಿಕಾರಿಗಳು ಸಂಬಂಧಿಸಿದ ಮೂಲ ದಾಖಲೆ ಪತ್ರಗಳನ್ನು ತಮ್ಮ ಕಚೇರಿಯಲ್ಲಿ ನಿರ್ವಹಣೆ ಮಾಡುವುದು. ಸಂಬಂಧಿಸಿದ ಸ್ಥಳೀಯ ಪಶುವೈದ್ಯರು ಯೋಜನೆಯಲ್ಲಿ ನೀಡಿದ ರಾಸುಗಳ ಆರೋಗ್ಯ ರಕ್ಷಣೆ, ಲಸಿಕೆ ಕಾರ್ಯ ಕೈಗೊಳ್ಳುವುದು. ಯೋಜನೆಯನ್ನು ಅನುಸರಣೆ ಮಾಡಿ ಕಾಲಕಾಲಕ್ಕೆ ಮಾಹಿತಿ ನೀಡುವುದು ಹಾಗೂ ವಿತರಿಸಿದ ಸ್ವತ್ತುಗಳ ಅನುಪಾಲನೆ ವಹಿ(Asset register) ನಿರ್ವಹಿಸುವುದು.
2. ಅನುಷ್ಠಾನಾಧಿಕಾರಿಗಳು ಹಣ ವಿನಿಯೋಗಿತ ಪತ್ರಗಳನ್ನು ಬ್ಯಾಂಕ್‌ಗಳಿಂದ ಪಡೆದು, ದೃಢೀಕರಿಸಿ ತಾಲ್ಲೂಕು ಸಹಾಯಕ ನಿರ್ದೇಶಕರುಗಳ ಮೂಲಕ ಉಪ ನಿರ್ದೇಶಕರಿಗೆ ಸಲ್ಲಿಸುವುದು
3. ಉಪ ನಿರ್ದೇಶಕರುಗಳು ಯೋಜನೆಯ ಅನುಷ್ಠಾನದ ಬಗ್ಗೆ ಹಾಗೂ ಯೋಜನೆಯ ಅನುಸರಣೆ/ಪ್ರಗತಿಯ ಬಗ್ಗೆ ಕಾಲಕಾಲಕ್ಕೆ ವರದಿ ಸಲ್ಲಿಸುವುದು.
4. ಜಿಲ್ಲೆಯ ಉಪ ನಿರ್ದೇಶಕರು ಅನುಷ್ಠಾನಗೊಂಡ ಯೋಜನೆಯ ಪ್ರತಿ ತಾಲ್ಲೂಕಿನಲ್ಲಿ ಕನಿಷ್ಠ ಶೇಕಡ 2 ರಷ್ಟು

## ಅನುಬಂಧ-ಸಿ

2. 3 ಕುರಿ / 3ಆಡು ಘಟಕ :

ಸದರಿ ಕಾರ್ಯಕ್ರಮವು ಲೆಕ್ಕ ಶೀರ್ಷಿಕೆ 2404-00-191-1-16 ಉಪ ಶೀರ್ಷಿಕೆ 422/423 ಅಡಿಯಲ್ಲಿ ಪರಿಶಿಷ್ಟ ಜಾತಿಯ/ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ರೂ 12000/- ಸಹಾಯಧನದೊಂದಿಗೆ ಮತ್ತು ರೂ 3000/- ವಂತಿಗೆಯೊಂದಿಗೆ ರೂ 15000/- ಘಟಕ ವೆಚ್ಚದಲ್ಲಿ 3ಕುರಿ/3ಆಡು ನೀಡುವುದು ಮತ್ತು ಸಾಮಾನ್ಯ ವರ್ಗದವರಿಗೆ ಉಪಶೀರ್ಷಿಕೆ 059 ಅಡಿಯಲ್ಲಿ ರೂ 10000/- ಸಹಾಯಧನದೊಂದಿಗೆ ಮತ್ತು ರೂ 5000/- ವಂತಿಗೆಯೊಂದಿಗೆ ರೂ 15000/- ಘಟಕ ವೆಚ್ಚದಲ್ಲಿ 3ಕುರಿ / 3 ಆಡು ನೀಡುವುದು.

10/08/2018

(ಟಿ.ಹನುಮಂತೇಗೌಡ)
ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ